

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1354 |
| ಉತ್ತರಿಸಬೇಕಾದ ದಿನಾಂಕ | : | 09.03.2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶುಸಂಗೋಪನೆ ಇಲಾಖೆಯಡಿ ಬರುವ ವಿವಿಧ ಯೋಜನೆಗಳು ಯಾವುವು; (ಪೂರ್ಣ ಮಾಹಿತಿ ನೀಡುವುದು) | ಅನುಬಂಧದಲ್ಲಿ ನೀಡಿದೆ. |
| ಆ | ಈ ಇಲಾಖೆಯ ವಿವಿಧ ಘಟಕಗಳಿಂದ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಹಾಗೂ ಸಾಮಾನ್ಯ ವರ್ಗದವರಿಗೆ ಪಶುಸಂಗೋಪನೆ ಸಲುವಾಗಿ ಸಾಮಾನ್ಯ ವರ್ಗಕ್ಕೆ ಸೇರಿದ ಫಲಾನುಭವಿಗಳ ಸಂಖ್ಯೆಯನ್ನು ಹೆಚ್ಚಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಜನಾನುರಾಗಿ ಕಾರ್ಯಕ್ರಮಗಳನ್ನು ಗುರುತಿಸಿ ಫಲಾನುಭವಿಗಳ ಸಂಖ್ಯೆ ಹೆಚ್ಚಿಸಲು ಹೆಚ್ಚಿನ ಅನುದಾನ ನೀಡಲು ಕ್ರಮ ಕೈಗೊಳ್ಳಲಾಗುವುದು. |
| ಇ | ಈ ಇಲಾಖೆಯ ವಿವಿಧ ಯೋಜನೆಗಳಡಿ ಕಳೆದ 02 ವರ್ಷಗಳಲ್ಲಿ ವಿಜಯಪುರ ಜಿಲ್ಲೆಯ ವ್ಯಾಪ್ತಿಗೆ ಬರುವ ಫಲಾನುಭವಿಗಳ ಸಂಖ್ಯೆ ಎಷ್ಟು; (ಯೋಜನೆಯನುಸಾರ ಮಾಹಿತಿ ನೀಡುವುದು) | (see table below) |

| ಕ್ರ ಸಂ | ಯೋಜನೆಯ ವಿವರ (2019-20) | ಫಲಾನುಭವಿಗಳ ಸಂಖ್ಯೆ |
|---|---|---|
| 1 | ಅಮೃತ ಯೋಜನೆ ಮಹಿಳೆಯರಿಗಾಗಿ | 36 |
| 2 | 3 ಕುರಿ ಅಥವಾ ಮೇಕೆ | 109 |
| 3 | ವಿಶೇಷ ಘಟಕ ಯೋಜನೆ | 12 |
| 4 | ವಿಶೇಷ ಘಟಕ ಯೋಜನೆ (ಕುರಿ/ಮೇಕೆ) | 48 |
| 5 | ಗಿರಿಜನ ಉಪಯೋಜನೆ (ಹೈನುಗಾರಿಕೆ) | 01 |
| 6 | ಗಿರಿಜನ ಉಪಯೋಜನೆ (ಕುರಿ/ಮೇಕೆ) | 05 |
| 7 | ವಿಶೇಷ ಘಟಕ ಯೋಜನೆ ರಾಜ್ಯವಲಯ (ಹೈನುಗಾರಿಕೆ) | 58 |
| 8 | ವಿಶೇಷ ಘಟಕ ಯೋಜನೆ ರಾಜ್ಯವಲಯ (ಕುರಿ/ಮೇಕೆ) | 36 |
| 9 | ಗಿರಿಜನ ಉಪಯೋಜನೆ ರಾಜ್ಯವಲಯ (ಹೈನುಗಾರಿಕೆ) | 01 |
| 10 | ಗಿರಿಜನ ಉಪಯೋಜನೆ ರಾಜ್ಯವಲಯ (ಕುರಿ/ಮೇಕೆ) | 01 |
| 11 | ಕೇಂದ್ರ ಪುರಸ್ಕೃತ ರಾಷ್ಟ್ರೀಯ ಜಾನುವಾರು ಮಿಷನ್ ಯೋಜನೆ (ಕುರಿ/ಮೇಕೆ) | 13 |
| 12 | ಕೇಂದ್ರ ಪುರಸ್ಕೃತ ರಾಷ್ಟ್ರೀಯ ಜಾನುವಾರು ಮಿಷನ್ ಯೋಜನೆ (ಹಂದಿ ಘಟಕ) | 09 |
| ಕ್ರ ಸಂ | ಯೋಜನೆಯ ವಿವರ (2020-21) | ಫಲಾನುಭವಿಗಳ ಸಂಖ್ಯೆ |
| 1 | ಕೇಂದ್ರ ಪುರಸ್ಕೃತ ರಾಷ್ಟ್ರೀಯ ಜಾನುವಾರು ಮಿಷನ್ ಯೋಜನೆ (ಕುರಿ/ಮೇಕೆ) | 46 |
| 2 | ಜಾನುವಾರು ಮಿಷನ್ ಯೋಜನೆ | 69 |

| | | |
|---|---|---|
| ಈ | ಪ್ರಸ್ತುತ ವಿಜಯಪುರ ಜಿಲ್ಲೆಯಲ್ಲಿ ವಿವಿಧ ಯೋಜನೆಯಡಿ ಅರ್ಜಿ ಸಲ್ಲಿಸಿದ ಫಲಾನುಭವಿಗಳ ಸಂಖ್ಯೆ ಎಷ್ಟು; ಯಾವ ಕಾಲಮಿತಿಯೊಳಗೆ ಪ್ರಸ್ತುತ ಅರ್ಜಿ ಸಲ್ಲಿಸಿದ ಫಲಾನುಭವಿಗಳಿಗೆ ಸಹಾಯಧನವನ್ನು ನೀಡಲಾಗುವುದು? | ವಿವಿಧ ಯೋಜನೆಗಳ ಅಡಿಯಲ್ಲಿ ಒಟ್ಟು –289 ಫಲಾನುಭವಿಗಳು ಅರ್ಜಿಸಲ್ಲಿಸಿರುತ್ತಾರೆ. ನಿಗದಿಯಾದ ಗುರಿಗಳನ್ವಯ ಆಯ್ಕೆ ಸಮಿತಿಯಲ್ಲಿ ಆಯ್ಕೆಯಾದ ಅರ್ಹ ಫಲಾನುಭವಿಗಳಿಗೆ ಪ್ರಸಕ್ತ ಅರ್ಥಿಕ ವರ್ಷದಲ್ಲಿ ಅನುದಾನಕ್ಕನುಗುಣವಾಗಿ ಅನುಷ್ಠಾನಗೊಳಿಸಲಾಗುವುದು. |

**ಇ–ಪಸಂಮೀ 61 ಸಲೆವಿ 2022**

**(ಪ್ರಭು ಬಿ. ಚವ್ಹಾಣ್)**
**ಪಶುಸಂಗೋಪನೆ ಸಚಿವರು**

## ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1354 ಕ್ಕೆ ಅನುಬಂಧ

ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ಪಶುಸಂಗೋಪನೆಯ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

| ಕ್ರ ಸಂ | ಕಾರ್ಯಕ್ರಮ | ವಿವರ |
|---|---|---|
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರ ಅನ್ವಯ ಬಳಕೆಯಾಗದ ಮೊತ್ತ | • ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಹಾಲು ಕರೆಯುವ ಯಂತ್ರ ಮತ್ತು ಹಸುಗಳ ನೆಲಹಾಸು ಇವುಗಳನ್ನು ಶೇ. 90 ರ ಸಹಾಯಧನದೊಂದಿಗೆ ವಿತರಿಸಲಾಗುವುದು. |
| 2. | ಲಸಿಕಾ ಕಾರ್ಯಕ್ರಮ | • ಗುರುತಿಸಲ್ಪಟ್ಟ ಸಾಂಕ್ರಾಮಿಕ ರೋಗಗಳ ವಿರುದ್ಧ ಲಸಿಕೆ ಹಾಕುವುದು.<br>• ಕಾಲುಬಾಯಿಜ್ವರ ಮತ್ತು ಕಂದುರೋಗಗಳ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 100 ಕೇಂದ್ರದ ಅನುದಾನ<br>• ಆಸ್ಕಾಡ್ ಯೋಜನೆಯಡಿಯಲ್ಲಿ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ (ಗಳಲೇರೋಗ, ಚಪ್ಪೆರೋಗ, ಕರುಳುಬೇನೆ, ನೆರಡಿರೋಗಗಳ ವಿರುದ್ಧ ಲಸಿಕೆ ಹಾಕುವುದು.)<br>• ಪಿ.ಪಿ.ಆರ್ ರೋಗದ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ |
| 3 | ಪಿಂಜರಾಪೋಲ್ ಮತ್ತು ಇತರೆ ಗೋಶಾಲೆಗಳಿಗೆ ಬೆಂಬಲ | • ಪಿಂಜರಾಪೋಲ್ ಹಾಗೂ ಇತರೆ ಗೋಶಾಲೆಗಳಲ್ಲಿರುವ ಪ್ರಾಣಿಗಳ ನಿರ್ವಹಣೆ,<br>• ಪ್ರತಿ ಜಿಲ್ಲೆಗೆ ಒಂದರಂತೆ ಗೋಶಾಲೆ ನಿರ್ವಹಣೆ. |
| 4 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ | • ನಿಗಮದಲ್ಲಿ ನೊಂದಣಿಯಾಗಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಪರಿಶಿಷ್ಟ ಪಂಗಡದ ಸದಸ್ಯರುಗಳಿಗೆ 6+1 ಕುರಿ/ಮೇಕೆ ಘಟಕ ವಿತರಿಸುವುದು,<br>• ವಲಸೆ ಕುರಿಗಾಗರಿಗೆ ಸಂಚಾರಿ ಟೆಂಟ್, ಸೋಲಾರ್ ಟಾರ್ಚ್, ರಬ್ಬರ್ ಪ್ಲೋರ್ ಮ್ಯಾಟ್ ಮತ್ತು ರೇನ್ ಕೋಟ್ ಸೇರಿದಂತೆ ಪರಿಕರಗಳ ಕಿಟ್‌ಗಳ ವಿತರಣೆ ಮಾಡಲಾಗುವುದು.<br>• ಕುರಿಗಾರರಿಗೆ ವೈಜ್ಞಾನಿಕ ಕುರಿ ಸಾಕಾಣಿಕೆಯಲ್ಲಿ ತರಬೇತಿ ನೀಡಲಾಗುವುದು. |
| 5 | ರಾಷ್ಟ್ರೀಯ ಜಾನುವಾರು ಮಿಷನ್ (ಕೇಂದ್ರ ಪುರಸ್ಕೃತ ಯೋಜನೆ) | • ಸಮಗ್ರ ಕುಕ್ಕುಟ ಅಭಿವೃದ್ಧಿ, ಹಿತ್ತಲ ಕುರಿ/ಮೇಕೆ, ಹಂದಿ ಅಭಿವೃದ್ಧಿ ಯೋಜನೆ.<br>• ವಿಪತ್ತು ನಿರ್ವಹಣೆ-ಜಾನುವಾರು ವಿಮಾ ಯೋಜನೆ,<br>• ಜಾನುವಾರುಗಳ ಆಕಸ್ಮಿಕ ಮರಣಕ್ಕೆ ಪರಿಹಾರಧನ |
| 6 | ಹಾಲು ಉತ್ಪಾದಕರಿಗೆ ಉತ್ತೇಜನ | • ಹಾಲು ಉತ್ಪಾದನೆಗೆ ಉತ್ತೇಜನ ನೀಡಲು ಕರ್ನಾಟಕ ಹಾಲು ಮಹಾ ಮಂಡಳಿಗೆ ಹಾಲು ಸರಬರಾಜು ಮಾಡುವ ಸದಸ್ಯರಿಗೆ ಪ್ರತಿ ಲೀಟರ್‌ಗೆ ರೂ. 5/- ರಂತೆ ಪ್ರೋತ್ಸಾಹಧನ ನೀಡಲಾಗುವುದು. |

| | | |
|---|---|---|
| 7 | ವಿಸ್ತರಣಾ ಘಟಕಗಳ ಬಲಪಡಿಸುವಿಕೆ | • ಮಿಶ್ರತಳಿ ಕರುಗಳ/ ಜಾನುವಾರು ಪ್ರದರ್ಶನ, ಹಾಲು ಕರೆಯುವ ಸ್ಪರ್ಧೆ, ಪ್ರಾಣಿ ಜನ್ಯ ರೋಗಗಳ ಜಾಗೃತಿ ಶಿಬಿರ ರೈತರ ತರಬೇತಿ ಮತ್ತು ಪ್ರವಾಸ, ಜಿಲ್ಲಾ ಮಟ್ಟದ ಪಶುಮೇಳ, ಜಾನುವಾರು ಜಾತ್ರೆ, ತಾಂತ್ರಿಕ ಸಂಕಿರಣ, |
| 8 | ಜಾನುವಾರುಗಳ ಆರೋಗ್ಯ ಶಿಬಿರ | • ಉಚಿತ ಜಾನುವಾರು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾನುವಾರುಗಳ ಆರೋಗ್ಯ ತಪಾಸಣೆ ಮಾಡಲಾಗುತ್ತಿದೆ. |
| 9 | ಪಶುಭಾಗ್ಯ ಯೋಜನೆ | • ಆರ್ ಕೆ ವಿ ವೈ, ಮತ್ತು ಹಾಲು ಉತ್ಪಾದಕರಿಗೆ ಉತ್ತೇಜನ ಕಾರ್ಯಕ್ರಮಗಳಲ್ಲಿ ಬಳಕೆಯಾಗದೆ ಉಳಿದ ಅನುದಾನದಲ್ಲಿ ಕೃಷಿ ಕಾರ್ಮಿಕರು, ವಿಧವೆಯರು, ದೇವದಾಸಿಯರು, ನಿರ್ಗತಿಕ ಮಹಿಳೆಯರಿಗೆ ಸ್ವಾವಲಂಬಿ ಜೀವನವನ್ನು ನಡೆಸಲು ಹೈನು ಘಟಕ, ಕುರಿ/ಮೇಕೆ ಘಟಕ ಮತ್ತು ಹಂದಿ ಘಟಕ ಸ್ಥಾಪನೆ ಮಾಡಲು ಸಹಾಯಧನ ನೀಡಲಾಗುತ್ತಿದೆ. |
| 10 | ಪಶು ಸಂಜೀವಿನಿ | • ಪಶುಪಾಲಕರ ಮನೆಯ ಬಾಗಿಲಲ್ಲಿ ರೋಗಗ್ರಸ್ಥ ಜಾನುವಾರುಗಳಿಗೆ ವಿಶೇಷ ತುರ್ತು ಚಿಕಿತ್ಸೆ ನೀಡಲು 15 ಜಿಲ್ಲೆಗಳಲ್ಲಿ "ಸುಸಜ್ಜಿತ ಪಶುಚಿಕಿತ್ಸಾ ವಾಹನ"ಗಳನ್ನು ಒದಗಿಸಲಾಗಿದೆ. |
| 11 | ಅಮೃತ ಸಿರಿ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಹೆಣ್ಣು ಕರುಗಳನ್ನು/ ಕಡಸುಗಳನ್ನು/ ಹಸುಗಳನ್ನು ಪುಸ್ತಕ ಬೆಲೆಯ ಶೇಕಡ 25 ರಂತೆ ಜಿಲ್ಲೆಯ ರೈತರಿಗೆ, ದೇವದಾಸಿಯರಿಗೆ, ವಿಧವೆಯರಿಗೆ, ಶವ ಸಂಸ್ಕಾರ ಕಾರ್ಮಿಕರಿಗೆ ವಿತರಣೆ ಮಾಡಲಾಗುವುದು. |
| 12 | ಅಮೃತ ಧಾರೆ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಗಂಡು ಕರುಗಳನ್ನು/ ಬೀಜದ ಹೋರಿಗಳನ್ನು ಇಲಾಖೆ ನಿಗದಿ ಪಡಿಸಿದ ಮಾರಾಟದ ಬೆಲೆಯಂತೆ ರೈತರಿಗೆ, ವಿತರಣೆ ಮಾಡಲಾಗುವುದು. |
| 13 | ಸಮಗ್ರ ಗೋಸಂಕುಲ ಸಮೃದ್ಧಿ ಯೋಜನೆ | • ಗಿರ್, ಸಾಹಿವಾಲ್, ಥಾರ್ ಪಾರ್ಕರ್, ಓಂಗೋಲ್, ದೇವಣಿ ತಳಿಗಳ ಮಾತೃ ಕೇಂದ್ರವನ್ನು ಸ್ಥಾಪಿಸುವುದು. |
| 14 | ಪ್ರಾಣಿ ಕಲ್ಯಾಣ ಸಹಾಯವಾಣಿ | • ಜಾನುವಾರುಗಳಿಗೆ 24/7 ನಿರಂತರ ಸೇವೆಯನ್ನು ಒದಗಿಸಲು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ರೈತರು ಸಹಾಯವಾಣಿಯನ್ನು ಪ್ರಾರಂಭಿಸಲಾಗಿದ್ದು ಸಹಾಯವಾಣಿ ಸಂಖ್ಯೆ 8277100200 ಮೂಲಕ ಸಂಪರ್ಕಿಸಿ ಇಲಾಖೆಯ ತಾಂತ್ರಿಕ ಸೇವೆಯನ್ನು ಪಡೆಯಬಹುದಾಗಿದೆ. |
| 15 | ಕೃತಕ ಗರ್ಭಧಾರಣೆ | • ರಾಜ್ಯದಲ್ಲಿರುವ ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಕೃತಕ ಗರ್ಭಧಾರಣೆ ಮಾಡಲಾಗುತ್ತಿದೆ. |